# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 97

ಸದಸ್ಯರ ಹೆಸರು : ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 07-12-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಕೋವಿಡ್ ಪರಿಹಾರ ಧನ ನೀಡುವಂತೆ ಕೋರಿ ಇದುವರೆಗೂ ಎಷ್ಟು ಜನ ಟ್ಯಾಕ್ಸಿ ಹಾಗೂ ಆಟೋ ಚಾಲಕರು ಅರ್ಜಿಯನ್ನು ಸಲ್ಲಿಸಿರುತ್ತಾರೆ? | ಕೊಡಗು ಜಿಲ್ಲೆಯಲ್ಲಿ ಕೋವಿಡ್ ಪರಿಹಾರ ಧನ ನೀಡುವಂತೆ ಕೋರಿ ಒಟ್ಟು 3506 ಅರ್ಜಿಗಳು ಸ್ವೀಕೃತವಾಗಿರುತ್ತವೆ |
| ಆ) | ಆ ಪೈಕಿ ಎಷ್ಟು ಜನ ಟ್ಯಾಕ್ಸಿ ಹಾಗೂ ಆಟೋ ಚಾಲಕರಿಗೆ ಪರಿಹಾರ ಧನ ವಿತರಣೆ ಮಾಡಲಾಗಿದೆ; | ಕೊಡಗು ಜಿಲ್ಲೆಯಲ್ಲಿ ಒಟ್ಟು 3194 ಅರ್ಜಿಗಳಿಗೆ ಕೋವಿಡ್ ಪರಿಹಾರ ಧನವನ್ನು ವಿತರಣೆ ಮಾಡಲಾಗಿರುತ್ತದೆ. |
| ಇ) | ಪರಿಹಾರ ಕೋರಿ ಅರ್ಜಿ ಸಲ್ಲಿಸಿರುವ ಬಹುತೇಕ ಅರ್ಹ ಫಲಾನುಭವಿಗಳ ಖಾತೆಗೆ ಇದುವರೆಗೂ ಪರಿಹಾರ ಹಣ ಜಮೆಯಾಗದೇ ಇರಲು ಕಾರಣಗಳೇನು; | I.D validation failed ತಾಂತ್ರಿಕ ಸಮಸ್ಯೆಯಿಂದ / ಫಲಾನುಭವಿಗಳ ಬ್ಯಾಂಕ್ ಖಾತೆಗಳು inactive ಆಗಿರುವ ಕಾರಣ / ಬ್ಯಾಂಕ್ ಖಾತೆಗಳಿಗೆ ಆಧಾರ್ ಸಂಖ್ಯೆ ಜೋಡಣೆ ಆಗದಿರುವ ಕಾರಣ ನಿಯಮಾವಳಿಯಂತೆ ಪರಿಹಾರ ಧನವನ್ನು ಕೋರಿ ಅರ್ಜಿ ಸಲ್ಲಿಸಿದವರಿಗೆ ಡಿ.ಬಿ.ಟಿ. ಮುಖಾಂತರ ನೇರವಾಗಿ ಜಮೆ ಮಾಡಲು ಸಾಧ್ಯವಾಗಿರುವುದಿಲ್ಲ. ಪರಿಹಾರ ಧನ ಕೋರಿರುವ ನೋಂದಾಯಿತ ಬಾಕಿ ಉಳಿದಿರುವ ಆಟೋರಿಕ್ಷಾ, ಟ್ಯಾಕ್ಸಿ ಚಾಲಕರಿಗೆ ಪರಿಹಾರ ಧನ ವಿತರಿಸುವ ಬಗ್ಗೆ ತಾಂತ್ರಿಕ ನ್ಯೂನ್ಯತೆಗಳನ್ನು ಸರಿಪಡಿಸಲಾಗಿದ್ದು ಪರಿಹಾರ ಧನವನ್ನು ವಿತರಿಸಲು ಕ್ರಮ ಕೈಗೊಳ್ಳಲಾಗಿದೆ. |

..2

| | | |
|---|---|---|
| ಈ) | ಇದುವರೆಗೂ ಜಿಲ್ಲೆಯಲ್ಲಿ ವಿತರಿಸಿರುವ ಪರಿಹಾರ ಧನದ ಮೊತ್ತವೆಷ್ಟು? ಹಾಗೂ ವಿತರಿಸಲು ಬಾಕಿ ಇರುವ ಪರಿಹಾರ ಧನದ ಮೊತ್ತವೆಷ್ಟು; | ಕೊಡಗು ಜಿಲ್ಲೆಯಲ್ಲಿ ಒಟ್ಟು 3194 ಅರ್ಜಿಗಳಿಗೆ ರೂ.5,000/- ಗಳಂತೆ ಒಟ್ಟು ರೂ.159,70,000/- ಲಕ್ಷಗಳ ಪರಿಹಾರ ಧನವನ್ನು ವಿತರಿಸಲಾಗಿದೆ. ಬಾಕಿ ಉಳಿದ ಅರ್ಜಿಗಳನ್ನು ಪರಿಶೀಲಿಸಿ ಪರಿಹಾರ ಧನ ವಿತರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ) | ಯಾವ ಕಾಲಮಿತಿಯೊಳಗೆ ಅರ್ಹ ಫಲಾನುಭವಿಗಳ ಖಾತೆಗೆ ಸದರಿ ಪರಿಹಾರದ ಹಣವನ್ನು ಜಮೆ ಮಾಡಲಾಗುವುದು? | ಆಟೋರಿಕ್ಷಾ / ಟ್ಯಾಕ್ಸಿ ಚಾಲಕರ ಪರಿಹಾರ ಧನ ಕೋರಿ ಸಲ್ಲಿಸಿರುವ ಅರ್ಜಿಗಳಲ್ಲಿ ತಂತ್ರಾಂಶದಲ್ಲಿ ಬ್ಯಾಂಕ್ ಖಾತೆಯು ಆಧಾರ್ ಸಂಖ್ಯೆಗೆ ಜೋಡಣೆಯಾಗದ ಕಾರಣ ಅಥವಾ ಜೋಡಣೆಯಾಗಿರುವ ಬ್ಯಾಂಕ್ ಖಾತೆಯು ಚಾಲ್ತಿಯಲ್ಲಿರದ ಕಾರಣ ಪರಿಹಾರ ಧನ ವಿತರಿಸುವ ಸಂಬಂಧ ಹೆಚ್ಚುವರಿ ಬ್ಯಾಂಕ್ ಖಾತೆಯ ಮಾಹಿತಿಗಳನ್ನು ದಿನಾಂಕ:25-11-2020 ರೊಳಗಾಗಿ ಸೇವಾ ಸಿಂಧು ವೆಬ್ ಪೋರ್ಟ್‌ಲ್‌ನಲ್ಲಿ ದಾಖಲಿಸಲು ಬಾಕಿ ಅರ್ಹ ಫಲಾನುಭವಿಗಳ ಮೊಬೈಲ್ ಸಂಖ್ಯೆಗೆ SMS ಮುಖಾಂತರ ಮಾಹಿತಿಯನ್ನು ನೀಡಲಾಗಿರುತ್ತದೆ. ಅದಕ್ಕನುಗುಣವಾಗಿ ಸ್ವೀಕೃತವಾಗಿರುವ ಮಾಹಿತಿಯನ್ನು ಪರಿಶೀಲಿಸಿ ಪರಿಹಾರಧನ ವಿತರಿಸುವ ಕ್ರಮ ಚಾಲ್ತಿಯಲ್ಲಿರುತ್ತದೆ. |

ಟಿಡಿ 112 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.